# ಕರ್ನಾಟಕ ವಿಧಾನ ಪರಿಷತ್ತು

01. ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ : 623

02. ಮಾನ್ಯ ವಿಧಾನ ಪರಿಷತ್ತಿನ ಸದಸ್ಯರ ಹೆಸರು : ಶ್ರೀ ಸಿ.ಎಂ. ಇಬ್ರಾಹಿಂ (ವಿಧಾನ ಸಭೆಯಿಂದ ಚುನಾಯಿತರಾದವರು)

03. ಉತ್ತರಿಸುವ ದಿನಾಂಕ : 04/03/2021

04. ಉತ್ತರಿಸುವ ಸಚಿವರು. : ಮಾನ್ಯ ಗೃಹ ಸಚಿವರು.

| ಕ್ರಸಂ | ಪ್ರಶ್ನೆ | ಉತ್ತರ |
|---|---|---|
| ಅ) | ಅಮಾನತ್ ಬ್ಯಾಂಕ್ ಅಕ್ರಮದ ತನಿಖೆಯು ಯಾವ ಹಂತದಲ್ಲಿದೆ; ಮತ್ತು ಇದುವರೆಗೂ ಯಾರ್ಯಾರ ಮೇಲೆ ಕೇಸ್ ದಾಖಲಿಸಿ ಕ್ರಮ ಕೈಗೊಳ್ಳಲಾಗಿದೆ; (ಸಂಪೂರ್ಣ ವಿವರ ಒದಗಿಸುವುದು) | ಅಮಾನತ್ ಕೋ-ಆಪರೇಟಿವ್ ಬ್ಯಾಂಕ್‌ನಲ್ಲಿ ಅಪರಿಚಿತ ವ್ಯಕ್ತಿಗಳ ಹೆಸರುಗಳಲ್ಲಿ ಖಾತೆಗಳನ್ನು ತೆರದು ಸಾಲವನ್ನು ನೀಡಿ ಆ ಮೂಲಕ ಸುಳ್ಳು ದಾಖಲಾತಿಗಳನ್ನು ಸೃಷ್ಠಿ ಮಾಡಿ ಸಹಕಾರ ಸಂಘಗಳ ಕಾಯಿದೆ ಮತ್ತು ಆರ್.ಬಿ.ಐ.ನಿಯಮಗಳ ಉಲ್ಲಂಘನೆ ಮಾಡಿ, ಒಟ್ಟು 60 ಕೋಟಿ ಹಣ ದುರುಪಯೋಗ ಮಾಡಿರುತ್ತಾರೆಂದು ದೂರಿನನ್ವಯ ಬೆಂಗಳೂರು ನಗರ ಕಮರ್ಷಿಯಲ್ ಸ್ಟ್ರೀಟ್ ಪೋಲೀಸ್ ಠಾಣೆ ಮೊಕದ್ದಮೆ ಸಂಖ್ಯೆ: 101/2003 ಕಲಂ 201, 403, 406, 408, 465, 477(ಎ), ಸಹ ಕಲಂ 34 ಭಾದಂಸಂ ಪ್ರಕರಣ ದಾಖಲಾತರುತ್ತದೆ. ಸದರಿ ಪ್ರಕರಣವನ್ನ ಡಿ.ಜಿ. ಮತ್ತು ಐ.ಜಿ.ಪಿ., ಕರ್ನಾಟಕ ರಾಜ್ಯ, ಬೆಂಗಳೂರು ರವರ ಟಿಪಿ/ಫ್ಯಾಕ್ಸ್ ಸಂದೇಶ ಸಂಖ್ಯೆ: ಸಿಆರ್‌ಎಂ/74/ಬೆಂ ನಗರ/2003, ದಿನಾಂಕ: 16.07.2003 ರಲ್ಲಿ ಸಿಓಡಿ ತನಿಖೆಗೆ ವಹಿಸಲಾಗಿರುತ್ತದೆ. |
| ಆ) | ಅಮಾನತ್ ಬ್ಯಾಂಕ್ ಅಕ್ರಮದಲ್ಲಿ ಈವರೆಗೂ ಒಟ್ಟಾರೆ recovery ಮಾಡಿದ ಆಸ್ತಿ ಹಣವೆಷ್ಟು; ಖಾತೆದಾರರಿಗೆ ಪಾವತಿ ಮಾಡಬೇಕಾದ ಮೊತ್ತ ಎಷ್ಟು; (ಸಂಪೂರ್ಣ ಅಂಕಿ ಅಂಶಗಳನ್ನು ಒದಗಿಸುವುದು) | |
| ಇ) | ಅಮಾನತ್ ಬ್ಯಾಂಕ್ ಅಕ್ರಮ ತನಿಖೆಯ ನಿಧಾನಗತಿಗೆ ಕಾರಣಗಳೇನು; | ಸದರಿ ಪ್ರಕರಣದಲ್ಲಿ ಈಗಾಗಲೇ ತನಿಖೆಯನ್ನು ಪೂರ್ಣಗೊಳಿಸಿ 03 ಜನ ಆರೋಪಿರುಗಳಾದ 1) ಮಹಮ್ಮದ್ ಅಸಾದುಲ್ಲಾ ಬಿನ್ ಮಹಮ್ಮದ್ ಯೂಸಫ್, 2) ಎ.ಷಫೀ ಉಲ್ಲಾ ಬಿನ್ ಅಬ್ದುಲ್ ವಹಾಬ್, 3) ಕೆ.ಹಿದಾಯತ್ ಉಲ್ಲಾ ಬಿನ್ ಅಹದ್ ಹುಸೇನ್‌ರವರುಗಳ ವಿರುದ್ಧ ಕಲಂ 409, 465, 468, 471, 477(ಎ), 201 ಸಹ ಕಲಂ 120(ಬಿ) ಮತ್ತು 34 ಭಾದಂಸಂ ರ ಅಡಿ ದಿನಾಂಕ: 12.06.2006 ರಂದು ವರ್ಷಾವಾರು ಅವ್ಯವಹಾರಕ್ಕೆ ಸಂಬಂಧಿಸಿದ ಈ ಕೆಳಕಂಡ 05 ಅಂತಿಮ ದೋಷಾರೋಪಣಾ ಪಟ್ಟಿಗಳನ್ನು ದಿನಾಂಕ:12.06.2006 ಮಾನ್ಯ ಬೆಂಗಳೂರಿನ 4ನೇ ಎ.ಸಿ.ಎಂ.ಎಂ. ನ್ಯಾಯಾಲಯಕ್ಕೆ ಸಲ್ಲಿಸಲಾಗಿರುತ್ತದೆ. |

| ಕ್ರಸಂ. | ವರ್ಷ | ಅವ್ಯವಹಾರದ ಮೊತ್ತ ರೂ.ಗಳಲ್ಲಿ |
|---|---|---|
| 1. | 1997–1998 | 2,00,000,00/– |
| 2. | 1998–1999 | 16,66,82,433/– |
| 3. | 1999–2000 | 4,48,00,000/– |
| 4. | 2000–2001 | 7,04,20,000/– |
| 5. | 2001–2002 | 8,47,74,692/– |
| **ಒಟ್ಟು** | | **38,66,77,125/–** |

ಮುಂದುವರೆದು, 03 ಜನ ಆರೋಪಿಗಳನ್ನು ತನಿಖಾ ಕಾಲದಲ್ಲಿ ದಸ್ತಗಿರಿ ಮಾಡಿದ್ದು, ನ್ಯಾಯಾಲಯದ ಜಾಮೀನಿನ ಮೇಲೆ ಇರುತ್ತಾರೆ.

| | | |
|---|---|---|
| | | ಮೇಲ್ಕಂಡ ದೋಷಾರೋಪಣಾ ಪಟ್ಟಿಗಳು ಬೆಂಗಳೂರಿನ 4ನೇ ಎ.ಸಿ.ಎಂ.ಎಂ. ನ್ಯಾಯಾಲಯ ಸಿ.ಸಿ.ಸಂಖ್ಯೆ: 12078/06, 12079/06, 12080/06, 12081/06 ಮತ್ತು 12083/06 ರಲ್ಲಿ ವಿಚಾರಣೆಯಲ್ಲಿರುತ್ತವೆ. ಸದರಿ ಪ್ರಕರಣವು 1997 ರಿಂದ 2002 ರ ಅವಧಿಗೆ ಸಂಬಂಧಿಸಿದ ವಂಚನೆ ಪ್ರಕರಣವಾಗಿದ್ದು, ಸದರಿ ಪ್ರಕರಣದಲ್ಲಿ ಕೆಪಿಐಡಿ ಎಫ್‌ಇ-2004 ರ ಕಾಯ್ದೆ ಅನ್ವಯವಾಗಿರುವುದಿಲ್ಲ. |
| ಈ) | IMA, AMBIDANT & INJAZ ಹಗರಣದಲ್ಲಿ ಈವರೆಗೂ ಒಟ್ಟಾರೆ ಎಷ್ಟು ಹಣವನ್ನು recovery ಮಾಡಲಾಗಿದೆ; ವಂಚನೆಗೆ ಒಳಗಾದ ಠೇವಣಿದಾರರಿಗೆ ಮರು ಪಾವತಿ ಮಾಡಬೇಕಾದ ಹಣವೆಷ್ಟು (ಅಂಕಿ-ಅಂಶಗಳ ಸಹಿತ ಸಂಪೂರ್ಣ ಮಾಹಿತಿ ಒದಗಿಸುವುದು) | <u>IMA:</u><br>ಸರ್ಕಾರದ ಆದೇಶ ಸಂಖ್ಯೆ: ಇ-ಹೆಚ್‌ಡಿ 08 ಪಿಸಿಆರ್ 2019, ಬೆಂಗಳೂರು, ದಿನಾಂಕ: 19/08/2019 ರಲ್ಲಿ I Monetary Advisory (IMA), Bengaluru and its group entities ವಿರುದ್ಧ ಕಮರ್ಷಿಯಲ್ ಪೊಲೀಸ್ ಠಾಣೆ ಮೊ.ಸಂ. 73/2019 ಮತ್ತು ಕರ್ನಾಟಕ ರಾಜ್ಯದ ಬೇರೆ ಬೇರೆ ಪೊಲೀಸ್ ಠಾಣೆಗಳಲ್ಲಿ ದಾಖಲಾಗಿರುವ ಪ್ರಕರಣಗಳನ್ನು ಸಿಬಿಐಗೆ ವರ್ಗಾಯಿಸಲಾಗಿದೆ. ಮುಂದುವರೆದು ಐ.ಎಂ.ಎ ಮತ್ತು ಅದರ ಅಂಗ ಸಂಸ್ಥೆಗಳ ವಂಚನೆ ಪ್ರಕರಣದಲ್ಲಿ ಅಂದಾಜು ರೂ.487.33 ಕೋಟಿ ಮೌಲ್ಯದ ಸ್ವತ್ತುಗಳನ್ನು ಸರ್ಕಾರವು ಮಧ್ಯಂತರ ಮುಟ್ಟುಗೋಲು ಮಾಡಿದ್ದು, ಅದರಲ್ಲಿ ಮಾನ್ಯ ವಿಶೇಷ ನ್ಯಾಯಾಲಯದ ಆದೇಶದಂತೆ ಸಕ್ಷಮ ಪ್ರಾಧಿಕಾರಿಗಳ ಖಾತೆಯಲ್ಲಿ ರೂ.5.33 ಕೋಟಿಗಳು ನಗದೀಕೃತವಾಗಿರುತ್ತದೆ. ಉಳಿದ ಸ್ವತ್ತುಗಳಿಗೆ ಸಂಬಂಧಿಸಿದಂತೆ ಮಾನ್ಯ ವಿಶೇಷ ನ್ಯಾಯಾಲಯದಲ್ಲಿ ಪ್ರಕರಣಗಳು ಬಾಕಿ ಇರುತ್ತವೆ.<br><br>ಸಕ್ಷಮ ಪ್ರಾಧಿಕಾರವು ಕೆ.ಪಿ.ಐ.ಡಿ ಕಾಯ್ದೆಯಡಿಯಲ್ಲಿ ಅವಕಾಶ ಕಲ್ಪಿಸಿರುವಂತೆ ಠೇವಣಿದಾರರಿಂದ ಕ್ಲೇಮು ಅರ್ಜಿಗಳನ್ನು ಸ್ವೀಕರಿಸಲಾಗಿರುತ್ತದೆ. ಕ್ಲೇಮು ಸಲ್ಲಿಕೆ ಅವಧಿಯಲ್ಲಿ ಸುಮಾರು 65,000 ಠೇವಣಿದಾರರು ಒಟ್ಟು ರೂ.2700 ಕೋಟಿ ಮೊತ್ತದ ಕ್ಲೇಮು ಸಲ್ಲಿಕೆ ಮಾಡಿರುತ್ತಾರೆ. ಸಕ್ಷಮ ಪ್ರಾಧಿಕಾರವು ಸಲ್ಲಿಕೆಯಾದ ಕ್ಲೇಮುದಾರರ ಅರ್ಜಿಗಳನ್ನು ಪರಿಶೀಲಿಸಲಾಗುತ್ತಿದೆ. ಮುಟ್ಟುಗೋಲು ಆದ ಸ್ವತ್ತುಗಳ ಮೌಲ್ಯವು ಕ್ಲೇಮ್ ಸಲ್ಲಿಕೆಯಾದ ಮೊತ್ತಕ್ಕಿಂತ ಕಡಿಮೆ ಇರುವುದರಿಂದ ಈಗಾಗಲೇ ಐಎಂಎ ವತಿಯಿಂದ ಠೇವಣಿದಾರರಿಗೆ ಪಾವತಿಯಾದ ಮೊತ್ತವನ್ನು ಹೊಂದಾಣಿಕೆ ಮಾಡಿ ಉಳಿಕೆ ರೂ.1461 ಕೋಟಿ ಮೊತ್ತವವನ್ನು ಠೇವಣಿದಾರರಿಗೆ ಮಾನ್ಯ ವಿಶೇಷ ನ್ಯಾಯಾಲಯವು ಆದೇಶ ನೀಡಿರುತ್ತದೆ. ನಂತರ ಮಾನ್ಯ ವಿಶೇಷ ನ್ಯಾಯಾಲಯವು ಅಂತಿಮ ಮುಟ್ಟುಗೋಲು ಆದೇಶ ಹೊರಡಿಸಿದ ಸ್ವತ್ತುಗಳ ಹರಾಜು ವಿಲೇವಾರಿಯಿಂದ ನಗದೀಕೃತಗೊಂಡ ಹಣವನ್ನು ಐ.ಎಂ.ಎ ಠೇವಣಿದಾರರಿಗೆ ಹಂಚಿಕೆ ಮಾಡುವ ಕುರಿತು ಮಾನ್ಯ ವಿಶೇಷ ನ್ಯಾಯಾಲಯದಲ್ಲಿ ವರದಿ ಸಲ್ಲಿಸಲಾಗುವುದು.<br><br>**<u>AMBIDANT:</u>**<br><br>ಆಂಬಿಡೆಂಟ್ ಪ್ರಕರಣದಲ್ಲಿ ರಿಕವರಿ ಮಾಡಲಾದ ಒಟ್ಟು ನಗದು ಮತ್ತು ಆಸ್ತಿಪಾಸ್ತಿಗಳ ಮೌಲ್ಯ ಒಟ್ಟು 56 ಕೋಟಿ. ರೂಗಳು. ಹಾಗೂ ಈವರೆಗೆ 4799 ವಂಚನೆಗಳೊಗಾದ ಠೇವಣಿದಾರರು ನೀಡಿರುವ |

| | | |
|---|---|---|
| | | ಮಾಹಿತಿಯಂತೆ ಒಟ್ಟು 76.83 ಕೋಟಿ ಹಣವನ್ನು ಹೂಡಿಕೆದಾರರಿಗೆ ವಿತರಿಸಬೇಕಾಗಿದ್ದು, ಈ ಬಗ್ಗೆ ಉಪ ವಿಭಾಗಾಧಿಕಾರಿ, ಬೆಂಗಳೂರು ಉತ್ತರ, ರವರು ಸಕ್ಷಮ ಪ್ರಾಧಿಕಾರಿಯಾಗಿ ಸರ್ಕಾರದಿಂದ ನೇಮಕಕೊಂಡಿರುತ್ತಾರೆ.<br>ಮುಂದುವರೆದು ಆಂಬಿಡೆಂಟ್ ಪ್ರಕರಣಕ್ಕೆ ಸಂಬಂಧಿಸಿದಂತೆ ಸರ್ಕಾರದ ಅಧಿಸೂಚನೆ ಸಂಖ್ಯೆ: ಆರ್.ಡಿ 19 ಜಿಆರ್‌ಸಿ 2017, ದಿನಾಂಕ.31.01.2019ರಲ್ಲಿ ದೂಷಿತ ಕಂಪನಿಯ ಆಸ್ತಿಗಳನ್ನು ಮುಟ್ಟುಗೋಲು ಹಾಕಿಕೊಳ್ಳಲು ಅಧಿಸೂಚಿಸಲಾಗಿದ್ದು, ಅದರಂತೆ ಸದರಿ ಆಸ್ತಿಗಳನ್ನು ಹರಾಜು ಮಾಡಲು ಮಾನ್ಯ ವಿಶೇಷ ನ್ಯಾಯಾಲಯ ಬೆಂಗಳೂರು ಇಲ್ಲಿ ಪ್ರಕರಣ ಸಂಖ್ಯೆ ಎಂ.ಐ.ಎಸ್.ಸಿ/225/2019ರಂತೆ ದಾಖಲಾಗಿದ್ದು, ಸದರಿ ಪ್ರಕರಣವು ಮಾನ್ಯ ವಿಶೇಷ ನ್ಯಾಯಾಲಯದಲ್ಲಿ ವಿಚಾರಣಾ ಹಂತದಲ್ಲಿರುತ್ತದೆ.<br>ಆಂಬಿಡೆಂಟ್ ಪ್ರಕರಣಕ್ಕೆ ಸಂಬಂಧಿಸಿದಂತೆ ವಂಚನೆಗೊಳಗಾದ ಠೇವಣಿದಾರರಿಂದ ಕ್ಲೇಮ್ ಅರ್ಜಿಗಳನ್ನು ಕರೆಯಲಾಗಿದ್ದು, ಒಟ್ಟು ರೂ.131,80,82,698/-ಗಳಿಗೆ ಕ್ಲೇಮ್ ಗಾಗಿ 7809 ಅರ್ಜಿಗಳು ಸ್ವೀಕೃತವಾಗಿರುತ್ತವೆ.<br><br>**INJAZ:**<br><br>ಇಂಜಾಜ್ ಇಂಟರ್ ನ್ಯಾಷನಲ್ ಪ್ರಕರಣದಲ್ಲಿ ಈವರೆವಿಗೆ ವಂಚಿತ ಕಂಪನಿಯ ಸ್ಥಿರಾಸ್ತಿಗಳಿಂದ 12,76,10,660 ರೂಗಳು ರಿಕವರಿ ಮಾಡಲಾಗಿದ್ದು, ಇನ್ನು ಚಿರಾಸ್ತಿ ಹಾಗೂ ಚರಾಸ್ತಿಗಳನ್ನು ಪತ್ತೆ ಮಾಡಬೇಕಾಗಿದೆ. ಈವರೆಗೆ ಒಟ್ಟು 9862 ಠೇವಣಿದಾರರು ಇಂಜಾಜ್ ಇಂಟರ್ ನ್ಯಾಷನಲ್ ಕಂಪನಿಯಲ್ಲಿ ಸುಮಾರು 279 ಕೋಟಿಯಷ್ಟು ಸಾರ್ವಜನಿಕರು ಹೂಡಿಕೆ ಮಾಡಿದ್ದು, ಇದರಲ್ಲಿ ಸುಮಾರು 190 ಕೋಟಿಯಷ್ಟು ಹೂಡಿಕೆದಾರರಿಗೆ ಹಣ ಹಿಂದಿರುಗಿಸಿದ್ದು, 89 ಕೋಟಿಗಳಷ್ಟು ಮರುಪಾವತಿ ಮಾಡಬೇಕಾಗಿದ್ದು, ಇದರಲ್ಲಿ ಈವರೆಗೆ 12,76,10,660 ರೂಗಳಷ್ಟು ಇಂಜಾಜ್ ಕಂಪನಿಗೆ ಸೇರಿದ ಸ್ಥಿರಾಸ್ತಿಗಳನ್ನು ಪತ್ತೆ ಮಾಡಿ ಮಾನ್ಯ ಸಕ್ಷಮ ಪ್ರಾಧಿಕಾರಿ ರವರಿಗೆ ಮುಂಧಿನ ಕ್ರಮಕ್ಕಾಗಿ ವರದಿ ಸಲ್ಲಿಸಿರುತ್ತೇವೆ ಮತ್ತು ಇನ್ನು ಹೆಚ್ಚಿನ ಸ್ಥಿರಾಸ್ತಿ ಹಾಗೂ ಚರಾಸ್ತಿಗಳನ್ನು ಪತ್ತೆ ಕಾರ್ಯಮುಂದುವರೆದಿರುತ್ತದೆ. ಈ ಬಗ್ಗೆ ಈಗಾಗಲೇ ಅಡಿಟ್ ವರದಿ ತಯಾರಾಗುತ್ತಿದ್ದು, ಒಟ್ಟಾರೆ ಕಂಪನಿಯು ಸಾರ್ವಜನಿಕ ಹೂಡಿಕೆದಾರರಿಂದ ಸಂಗ್ರಹಿಸಿದ ಒಟ್ಟು ಮೊತ್ತ ಹಾಗೂ ಮರುಪಾವತಿಸಿದ ಮೊತ್ತ ಹಾಗೂ ಉಳಿಕೆ ಮರುಪಾವತಿಸಬೇಕಾದ ಒಟ್ಟು ಮೊತ್ತದ ಬಗ್ಗೆ ತನಿಖೆಯಿಂದ ತಿಳಿಯಬೇಕಾಗಿರುತ್ತದೆ. |
| ಉ) | IMA, AMBIDANT & INJAZ ಪ್ರಕರಣದಲ್ಲಿ ಇಲ್ಲಿಯವರೆಗೆ ಯಾರ್‍ಯಾರ ಮೇಲೆ ಕ್ರಮ ಕೈಗೊಳ್ಳಲಾಗಿದೆ; ಇದರಲ್ಲಿ ರಾಜಕಾರಣಿಗಳ ಹೆಸರುಗಳು ಕೇಳಿ ಬಂದಿದೆಯೇ; ಬಂದಿದ್ದಲ್ಲಿ, ಈ ಕುರಿತು ಸರ್ಕಾರ ಕೈಗೊಂಡ ಕ್ರಮಗಳೇನು? | **IMA:**<br>ಸರ್ಕಾರದ ಆದೇಶ ಸಂಖ್ಯೆ: ಇ-ಹೆಚ್‌ಡಿ 08 ಪಿಸಿಆರ್ 2019, ಬೆಂಗಳೂರು, ದಿನಾಂಕ: 19/08/2019 ರಲ್ಲಿ I Monetary Advisory (IMA), Bengaluru and its group entities ವಿರುದ್ಧ ಕಮರ್ಷಿಯಲ್ ಪೊಲೀಸ್ ಠಾಣೆ ಮೊ.ಸಂ. 73/2019 ಮತ್ತು ಕರ್ನಾಟಕ ರಾಜ್ಯದ ಬೇರೆ ಬೇರೆ ಪೊಲೀಸ್ ಠಾಣೆಗಳಲ್ಲಿ ದಾಖಲಾಗಿರುವ ಪ್ರಕರಣಗಳನ್ನು ಸಿಬಿಐಗೆ ವರ್ಗಾಹಿಸಲಾಗಿದೆ.<br><br>**AMBIDANT:**<br><br>ಈ ಪ್ರಕರಣದಲ್ಲಿ ಇಲ್ಲಿಯವರೆಗೆ ಒಟ್ಟು 10 ಜನ ಆರೋಪಿಗಳ ವಿರುದ್ಧ |

| | | |
|---|---|---|
| | | ಕ್ರಮಕೈಗೊಳ್ಳಲಾಗಿದೆ.<br><br>1)ಆಂಬಿಡೆಂಟ್ ಮಾರ್ಕೆಟಿಂಗ್ ಪ್ರೈ. ಲಿ. ಕಂಪನಿ.<br><br>2)ಸೈಯದ್ ಫರೀದ್ ಅಹ್ಮದ್, 3)ಸೈಯದ್ ಅಫಾಕ್ ಅಹ್ಮದ್,<br><br>4)ಇರ್ಫಾನ್ ಮಿರ್ಜಾ, 5)ವಿಜಯ್‌ಟಾಟಾ, 6)ಜಿ. ಜನಾರ್ಧನ್ ರೆಡ್ಡಿ,<br><br>7)ಕೆ. ಮೆಹಫೂಜ್ ಆಲಿಖಾನ್, 8) ರಮೇಶ, 9) ಇನಾಯತ್ ಉಲ್ಲಾ ವಹಾಬ್, 10) ಅರ್ಷಫ್ ಆಲಿ.<br><br>ಈ ಪ್ರಕರಣದಲ್ಲಿ ಆರೋಪಿ-6 ಜಿ. ಜನಾರ್ಧನ್ ರೆಡ್ಡಿ, ಕರ್ನಾಟಕ ಸರ್ಕಾರದ ಮಾಜಿ ಸಚಿವರಾಗಿದ್ದು, ಇವರನ್ನು ದಿನಾಂಕ: 11/11/2018 ರಂದು ದಸ್ತಗಿರಿ ಮಾಡಿ ಮಾನ್ಯ ನ್ಯಾಯಾಲಯಕ್ಕೆ ಹಾಜರುಪಡಿಸಿದ್ದು, ಪ್ರಸ್ತುತ ಮಾನ್ಯ ನ್ಯಾಯಾಲಯದ ಜಾಮೀನಿನ ಮೇಲಿರುತ್ತಾರೆ. ಈ ಪ್ರಕರಣವು ಸಿ.ಸಿ.ಹೆಚ್-1 ವಿಶೇಷ ನ್ಯಾಯಾಲಯ ಬೆಂಗಳೂರು ಇಲ್ಲಿ ಸ್ಪೆಷಲ್ ಸಿ.ಸಿ. ನಂ.164/2019 ರಂತೆ ವಿಚಾರಣಾ ಹಂತದಲ್ಲಿದ್ದು, 173(8) ರ ಅಡಿಯಲ್ಲಿ ತನಿಖೆ ಮುಂದುವರೆದಿರುತ್ತದೆ.<br><br>**INJAZ:**<br><br>ಈ ಪ್ರಕರಣದಲ್ಲಿ ಇಲ್ಲಿಯವರೆಗೆ ಪ್ರಮುಖ ಆರೋಪಿಗಳಾದ 1) ಮಿಸ್ಬಾವುದ್ದೀನ್ ಎಸ್.@ ಮುಕಾರಾಂ ಬಿನ್ ಸಲಾವುದ್ದೀನ್, ಮತ್ತು 2)ಸುಹೇಲ್ ಅಹಮದ್ ಷರೀಫ್ ಬಿನ್ ಲೇಟ್ ಇಕ್ಬಾಲ್ ಪಾಷ, ಇವರುಗಳು ಮಾನ್ಯ ನ್ಯಾಯಾಲಯದಿಂದ ಈಗಾಗಲೇ ನಿರೀಕ್ಷಣಾ ಜಾಮೀನು ಪಡೆದಿರುತ್ತಾರೆ ಹಾಗೂ ಈ ಪ್ರಕರಣದಲ್ಲಿ ಇಲ್ಲಿಯವರೆಗಿನ ತನಿಖೆಯಿಂದ ಯಾವುದೇ ರಾಜಕಾರಿಣಿಗಳ ಹೆಸರು ಕೇಳಿ ಬಂದಿರುವುದಿಲ್ಲ. |

HD 5 SDN 2021

**(ಬಸವರಾಜ ಬೊಮ್ಮಾಯಿ)**
ಗೃಹ ಸಚಿವರು